ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ಜೇಷ್ಠತಾ ಪಟ್ಟಿ ಕುರಿತು

ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು) :-

684 (792) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 2010ನೇ ಸಾಲಿನಿಂದ ಇಲ್ಲಿಯವರೆಗೆ ಪಂಚಾಯತಿ ಅಭಿವೃದ್ಧಿಗೆ ಅಧಿಕಾರಿಗಳಿಗೆ ಬಡ್ತಿ ನೀಡಲಾಗಿದೆಯೇ ; ನೀಡಿದ್ದಲ್ಲಿ ಯಾವ ಜೇಷ್ಠತಾ ಪಟ್ಟಿಯ ಆಧಾರದಲ್ಲಿ ಬಡ್ತಿ ನೀಡಲಾಗಿದೆ ; ಎಷ್ಟು ಅಧಿಕಾರಿಗಳಿಗೆ ಬಡ್ತಿ ನೀಡಲಾಗಿದೆ ; (ಸಂಪೂರ್ಣ ವಿವರ ನೀಡುವುದು)

(ಆ) ಪ್ರಸ್ತುತ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳ ರಾಜ್ಯ ಮಟ್ಟದ ಜೇಷ್ಠತಾ ಪಟ್ಟಿಯನ್ನು ರದ್ದುಗೊಳಿಸಿ, ಪರಿಷ್ಕೃತ ಜೇಷ್ಠತಾ ಪಟ್ಟಿಯನ್ನು ನಿಯಮಾನುಸಾರ ತಯಾರಿಸುವಂತೆ ಯಾವುದಾದರೂ ನ್ಯಾಯಾಲಯ ಆದೇಶಿಸಿದೆಯೇ ; ಆದೇಶಿಸಿದಲ್ಲಿ ನ್ಯಾಯಾಲಯದ ಆದೇಶದ ವಿವರಗಳನ್ನು ನೀಡುವುದು;

(ಇ) ರದ್ದಾಗುವ ಮುನ್ನ ಮೂಲ ಜೇಷ್ಠತಾ ಪಟ್ಟಿಯನ್ನು ಆಧರಿಸಿ ಬಡ್ತಿ ಪಡೆದ ಅಧಿಕಾರಿಗಳ ಪ್ರಸ್ತುತ ಹುದ್ದೆಗಳ ಕುರಿತು ಸರ್ಕಾರದ ನಿಲುವೇನು ; (ವಿವರ ನೀಡುವುದು)

(ಈ) ಜೇಷ್ಠತಾ ಪಟ್ಟಿ ನಿಯಮಾನುಸಾರ ತಯಾರಿಸಿ, ನ್ಯಾಯಾಲಯಕ್ಕೆ ಸಲ್ಲಿಸಲು ಸರ್ಕಾರಕ್ಕೆ ಇರುವ ತೊಡಕುಗಳೇನು ; ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ರಾಜ್ಯ ಮಟ್ಟದ ಜೇಷ್ಠತಾ ಪಟ್ಟಿಯನ್ನು ಅಸ್ತಿತ್ವಕ್ಕೆ ತರಲು ಆಗಿರುವ ವಿಳಂಬಕ್ಕೆ ಕಾರಣಗಳೇನು ; ಮತ್ತು ಇದನ್ನು ಕಾಲಮಿತಿಯಲ್ಲಿ ಸರಿಪಡಿಸಲು ಕೈಗೊಂಡ ಕ್ರಮಗಳೇನು; (ವಿವರ ನೀಡುವುದು)

(ಉ) ಜೇಷ್ಠತಾ ಪಟ್ಟಿ ನಿಯಮಾನುಸಾರ ತಯಾರಿಸಿ, ಇಲಾಖೆಯ ವೃಂದದಲ್ಲಿ ಖಾಲಿಯಿರುವ ಸ್ಥಾನಗಳಿಗೆ ಬಡ್ತಿ ನೀಡಲು ಎಷ್ಟು ಕಾಲಾವಕಾಶ ಅಗತ್ಯವಿದೆ ?